ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ: 14ನೇ ಡಿಸೆಂಬರ್, 2020

ಆದಿವಾಸಿ ಹಾಡಿಗಳಲ್ಲಿ ಶುದ್ಧ ನೀರಿನ ಘಟಕ ಸ್ಥಾಪನೆ ಬಗ್ಗೆ

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

539(651) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಿಂದ ರಾಜ್ಯದಲ್ಲಿನ ಆದಿವಾಸಿಗಳ ಹಾಡಿಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಿ 2 ವರ್ಷ ಕಳೆದರೂ ಇದುವರೆಗೂ ಕಾರ್ಯಾರಂಭವಾಗದೆ, ಅಲ್ಲಿನ ಜನರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಯಾವ ಯಾವ ಆದಿವಾಸಿಗಳ ಹಾಡಿಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಿ ಕಾರ್ಯಾರಂಭವಾಗದೆ ಉಳಿದಿರಲು ಕಾರಣಗಳೇನು ; (ಜಿಲ್ಲಾವಾರು, ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು)

(ಇ) ಕಳೆದ 3 ವರ್ಷಗಳಲ್ಲಿ ಆದಿವಾಸಿಗಳ ಹಾಡಿಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕ ಸ್ಥಾಪಿಸಲು ಮಂಜೂರಾಗಿರುವ ಅನುದಾನವೆಷ್ಟು ; (ವಾರ್ಷಿಕವಾರು ಆದೇಶದ ಪ್ರತಿಯೊಂದಿಗೆ ಸಂಪೂರ್ಣ ವಿವರ ನೀಡುವುದು)

(ಈ) ಸದರಿ ಅನುದಾನದಲ್ಲಿ ಸ್ಥಾಪಿಸಿರುವ ಘಟಕಗಳಾವುವು; ಈ ಘಟಕಗಳನ್ನು ನಿರ್ಮಾಣ ಮಾಡಲು ಯಾರಿಗೆ/ಯಾವ ಸಂಸ್ಥೆಗೆ ವಹಿಸಲಾಗಿತ್ತು ; (ಪ್ರತಿ ಘಟಕವಾರು ಅಂದಾಜು ಪಟ್ಟಿಯೊಂದಿಗೆ ಹಾಗೂ ಕರಾರು ಪ್ರತಿಯೊಂದಿಗೆ ಪೂರ್ಣ ವಿವರ ನೀಡುವುದು)

(ಉ) ಸದರಿ ಶುದ್ಧ ಕುಡಿಯುವ ನೀರಿನ ಘಟಕಗಳ ನಿರ್ವಹಣೆಯನ್ನು ಯಾವ ಇಲಾಖೆಗೆ/ಯಾರಿಗೆ ನೀಡಲಾಗಿದೆ; ನಿರ್ವಹಣೆಗೆ ಮಂಜೂರು ಮಾಡಿರುವ ಅನುದಾನವೆಷ್ಟು ? (ಸಂಪೂರ್ಣ ವಿವರ ನೀಡುವುದು)